# ಹಿಂದೂ ಧರ್ಮ

ವಿನೋಬಾ

ಅನುವಾದ

ಆರ್ಕೈಯರ್

ತಿರುನಾರಾಯಣಪುರಂ

ಮೇಲುಕೋಟೆ

೧೯೬೨

ಹಿಂದೂಧರ್ಮ–

ಈ ಪುಸ್ತಕದ ಪ್ರಕಾಶನಕ್ಕೆ ನೆರವಾದ ಸಂಪತ್ತಿದಾನಿಗಳು

ಶ್ರೀಯುತರಾದ:–

೧. ನಲ್ಲಾರ್ ಗೋಪಾಲನ್
೨. ಶ್ರೀನಿವಾಸರಾಘವಾಚಾರ್ ಮತ್ತು ಬಳಗ
೩. ಮಾ. ಶ್ರೀ. ಎಂ. ವಿ. ಯದುಗಿರಿಯಮ್ಮ
೪. ಎಂ. ವಿ. ಚಕ್ರವರ್ತಿ
೫. ರೇಣುಕಾ ಮಹೇಶ
೬. ಭಾರದ್ವಾಜ್
೭. ಚಕ್ರಪಾಣಿ
೮. ಎಂ. ಆರ್. ಕೃಷ್ಣನ್
೯. ಎಸ್. ಶ್ರೀನಿವಾಸಮೂರ್ತಿ
೧೦. ಕಡಾಂಬಿ ರಘು

– ಅರೈಯರ್

# ಪ್ರಾಸ್ತಾವಿಕ

ಅಧ್ಯಾತ್ಮ ಹಳೆ ಹಳೆಯದಾದಷ್ಟೂ ಮಾನ್ಯ. ಋಗ್ವೇದ 'ವಿಶ್ವಮಾನುಷ' ಎಂಬ ವ್ಯಾಪಕವಾದ ಹೆಸರನ್ನೇ ನಮಗೆಲ್ಲ ನೀಡಿದೆ. ಹೊಚ್ಚ ಹೊಸ ಸಾಮಾಜಿಕ ವಿಜ್ಞಾನವೂ ವಿಶ್ವಮಾನವರಿಗೆ ಮಾನ್ಯ. ವೇದಾನ್ತ ವಿಜ್ಞಾನಗಳಿಂದಲೇ ನಿಶ್ಚಿತವಾದ ಎಲ್ಲರ ಲೇಸನ್ನೂ ಬಯಸುವ ಅರ್ಥ ಸಿಗುವುದು.

ಈ ಜಾಗತಿಕ ಹಿನ್ನೆಲೆಯಲ್ಲಿ ಮಾನವ ಮಾನವರಿಗೆಲ್ಲ ಒಂದೇ ಸಾರತಮ ಧರ್ಮ. ಅದರೊಳಗೆ ವಿವಿಧತೆ ಅಡಗಿದೆ. ಆದರೂ ಅವಷ್ಟನ್ನೂ ದಾಟಿದ ಧರ್ಮ ಒಂದೇ! ಸಿದ್ಧಧರ್ಮ – ಶುದ್ಧಧರ್ಮ. ಅದನ್ನು ಬ್ರಹ್ಮ, ಆತ್ಮಾ, ಸತ್, ನಾರಾಯಣ, ಅಲ್ಲಾ, ಆಲ್‌ಮೈಟಿ, ಶೂನ್ಯ, ನೀತಿ, ಅಹಿಂಸೆ ಯಾವ ಹೆಸರಿಂದಲಾದರೂ ಕರೆಯೋಣ. ಬಿಡೋಣ. ಅದಂತೂ ಒಂದೇ!

ಅವರವರ ಪರಿಸ್ಥಿತಿ, ಅಭಿರುಚಿ, ಮಟ್ಟಗಳಿಗೆ ಆಯಾಯಾ ವಿಶೇಷ ಧರ್ಮಗಳು ಅವರವರಿಗೆ ಅಚಲ ಮಾನ್ಯವೇ! ಆದರೂ ಉಳಿದ ಸಾಮಾನ್ಯ ಧರ್ಮಕ್ಕೆ ಅವಿರೋಧಿ. ಈ ಪರಿಪಾಕವೇ ಯುಗಧರ್ಮ. ಅದೇ ಚಿತ್–ಅಚಿತ್–ಈಶ್ವರರಲ್ಲಿನ ಸಾಮ್ಯ. ಈಶ್ವರ, ಸಾರ್ವಭೌಮ, ಸ್ವಯಂಸತ್ಯ. ಜೀವಾತ್ಮ, ಸತ್ಯ ಸಾಕ್ಷಾತ್ಕಾರಕ್ಕಾಗಿ ಪ್ರೇಮಳ ಸರ್ವ ಸೇವಾ ನಿಷ್ಠ. ಜಡಜಗತ್ತೆಲ್ಲವೂ ಸೇವಾ ಸಾಮಗ್ರೀ.

Funding: Tattva Heritage Foundation,Kolkata. Digitization: eGangotri.



ಇನ್ನೂರು ವರ್ಷಗಳಿಂದ ಜಗತ್ತಿನ ಸ್ಫುರಣೆಯನ್ನು ಗಮನಿಸಿದರೆ ಫ್ರಾನ್ಸಿನ ಕ್ರಾಂತಿಯ ತ್ರಿಸೂತ್ರೀ ಬಲು ಮನನೀಯ. ಸಮಾನತೆ, ಸ್ವಾತಂತ್ರ್ಯ, ಬಂಧುಭಾವ. ಸಕಲ ಮಾನವ ಧರ್ಮದ ಒಂದು ಸರ್ವ ಅವಿರೋಧಿ ಸಂಹಿತೆಯೇ ಇದೆನ್ನಬಹುದು. ತಂತ್ರಜ್ಞಾನ, ವಿದ್ಯುಚ್ಛಕ್ತಿ, ಔದ್ಯೋಗಿಕ ಕ್ರಾಂತಿ, ಆಡಳಿತ ಕ್ರಮಗಳ ನಾನಾ ಹಂತಗಳು, ಧನವಾದ, ಸಾಮ್ಯವಾದ, ಸಾಮ್ರಾಜ್ಯವಾದ, ಜಾತಿವಾದ, ಪಕ್ಷವಾದ ಮುಂತಾದವುಗಳೆಲ್ಲಾ ವಿಫಲಗೊಳ್ಳುತ್ತಿರುವ ಈ ಸಂದರ್ಭದಲ್ಲಿ ನಿಜವಾದ ವಿಚಾರಕ್ರಾಂತಿ ಅತ್ಯಗತ್ಯ. ೧೯–೨೦ ಈ ಎರಡೂ ಶತಮಾನಗಳಲ್ಲಿ ಸತ್ಯ ಶೋಧನೆಗಾಗಿ ಅಹಿಂಸಾ ಪ್ರೇಮಳ ಪ್ರಯೋಗವನ್ನು ಸಕಲ ಕ್ಷೇತ್ರಗಳಲ್ಲೂ ಮಾಡಿತೋರಿದ ಗಾಂಧೀ. ಆತನಿಂದ ಸೈ ಅನಿಸಿಕೊಂಡವ ಆಚಾರ್ಯ ವಿನೋಬಾ.

ಇವರು ೭೦ ವರ್ಷಗಳ ಹಿಂದೆಯೇ ಬರೆದ "ಅಭಾವ ಕೀ ಮಹಿಮಾ" ಎಂಬ ಅಪೂರ್ವ ಲೇಖನದ ಆಂಶಿಕ ಅನುವಾದವೇ ಈ ಪ್ರಕೃತ ಕೃತಿ."ಮೈತ್ರೀ" ಪತ್ರಿಕೆ ಮತ್ತು "ಸರ್ವೋದಯ ವಾಹಿನಿ" ಪತ್ರಿಕೆಗಳಿಂದ ಉಪಕಾರ ಪಡೆದುಕೊಂಡಿರುವ ಈ ಕಿರು ಹೊತ್ತಿಗೆ. ಯಥಾರ್ಥ ವೈಜ್ಞಾನಿಕ ಆಧ್ಯಾತ್ಮಿಕ ಕ್ರಾಂತಿಗೆ, ಸರ್ವಭೂತಾಭ್ಯುದಯ ಹಾಗೂ ನಿಶ್ರೇಯಸಕ್ಕೆ ಸ್ಫೂರ್ತಿ ನೀಡಲಿ.

ಅಯ್ಯರ್

# ಹಿಂದೂಧರ್ಮ

## ವಿನೋಬಾ.

ನಾನು, ನೀನು, ಅದು ಎಂಬ ಮೂರು ಪುರುಷಗಳಿಂದ ಇಡೀ ವಿಶ್ವದ ವ್ಯಾಖ್ಯಾನವೆಲ್ಲಾ ಆಗಿಹೋಗುತ್ತದೆ. "ಅಹಂ ತ್ವಂ ತತ್." ನಾನೂ ನೀನೂ ಅದೇ ಆಗಿದ್ದೇವೆ. ನಾನು ಎಂದರೆ ಯಾವುದಾದರೊಂದು ಜೀವ. ನೀನು ಎಂದರೆ ಅದಲ್ಲದ ಸರ್ವಜಗತ್ತು. ಅದು ಎಂದರೆ ಇವೆರಡಕ್ಕೂ ದಾಟಿರುವ ಜಗತ್‌ಕರ್ತಾ.

ಇವು ಮೂರೂ ಅನ್ಯೋನ್ಯ ಭಾವದಿಂದಲೇ ಸಹಜವಾಗಿ ಓತಪ್ರೋತವಾಗಿವೆ. ಅಂದರೆ :–

೧. ನನ್ನಲ್ಲಿ ಸರ್ವಭೂತಗಳೂ ಹಾಗೂ ಪರಮೇಶ್ವರ;
೨. ಸರ್ವಭೂತಗಳಲ್ಲಿ ಪರಮೇಶ್ವರ ಮತ್ತು ನಾನು;
೩. ಪರಮೇಶ್ವರನಲ್ಲಿ ನಾನು ಮತ್ತು ಸರ್ವಭೂತಗಳು;

ಹಿಂದೂಧರ್ಮದ ರಚನೆಯನ್ನು ತತ್ವದ್ರಷ್ಟಾರರಾದ ಮಹರ್ಷಿಗಳು ಈ 'ಅನ್ಯೋನ್ಯಭಾವ'ವೆಂಬ ಉದಾರ ವ್ಯಾಪಕ ತತ್ವದ ಆಧಾರದಿಂದಲೇ ಎಸಗಿರುವುದು. ಆದುದರಿಂದ 'ಹಿಂದೂಧರ್ಮ' ಎಂಬುದಕ್ಕೆ ವ್ಯಾವರ್ತಕ ವ್ಯಾಖ್ಯಾನ ಮಾಡಲು ಹೊರಟರೆ ಅದು ಹಿಂದೂಧರ್ಮದ ಬುಡಕ್ಕೇ ಕೊಡಲಿಪೆಟ್ಟು.

**ವ್ಯಾವರ್ತಕ ವ್ಯಾಖ್ಯಾನವೆಂದರೇನು?**

ಯಾರು ಮುಸಲ್ಮಾನರಲ್ಲವೋ, ಈಸಾಯಿ ಅಲ್ಲವೋ, ಬೌದ್ಧ, ಪಾರಸಿ ಇತ್ಯಾದಿಯಲ್ಲವೋ ಅವರು ಹಿಂದೂ. ಇರುವುದನ್ನು ನೇರ ಹೇಳದೆ 'ಅದು ಇತರ ವಸ್ತುಗಳಿಂದ ಭಿನ್ನ' ಎಂಬ ಪರೋಕ್ಷ ವರ್ಣನೆಗೆ ವ್ಯಾವರ್ತಕ ವ್ಯಾಖ್ಯೆಯೆನ್ನುವುದು. ಈ 'ಅನ್ಯೋನ್ಯ-ಅಭಾವ' ಸಮಾಜಶಾಸ್ತ್ರದಲ್ಲಿ ಅನರ್ಥಕಾರಿ. ಏಕೆಂದರೆ ಇಡೀ ವಿಶ್ವ ಸಮಾಜ 'ಅನ್ಯೋನ್ಯ ಭಾವ'ದಿಂದಲೇ ನಿಂತಿದೆ.

**ವಿಚಾರ ಸ್ವಾತಂತ್ರ್ಯ :**

ಹಿಂದೂ ಧರ್ಮವನ್ನು 'ಸನಾತನ ಧರ್ಮ' ಎನ್ನಲಾಗುತ್ತದೆ. ಯಾವಾಗಲೂ, ಎಲ್ಲೆಲ್ಲೂ, ಎಲ್ಲರ ಭಾಗಕ್ಕೂ ಇರುವ ಸ್ವಾಭಾವಿಕ ಸಹಜಧರ್ಮವೆಂದೇ ಅದರ ಅರ್ಥ. ಭಗವದ್ಗೀತೆ ಇದನ್ನೇ ಸ್ವಧರ್ಮ ಎನ್ನುತ್ತದೆ.

ಆದರೆ ಒಂದು ಸ್ವರ ಇತಿಹಾಸದಲ್ಲಿ ಕೇಳಿಬರುತ್ತದೆ. ಅದೇನೆಂದರೆ : 'ಹಿಂದೂಧರ್ಮ ಬೌದ್ಧಧರ್ಮವನ್ನು ಭಾರತದಿಂದ ಹೊರಗಟ್ಟಿತು' ಎಂದು. ಈ ಮಾತು ಅಜ್ಞಾನ ಮೂಲಕವಾದುದು. ವಸ್ತುಸ್ಥಿತಿಯೆಂದರೆ ಬುದ್ಧದೇವನಲ್ಲಿ ಸತ್ಯದ ಅಂಶಾವತಾರವನ್ನೇ ಹಿಂದೂಧರ್ಮ ಗುರುತಿಸಿದೆ. ಬೌದ್ಧದರ್ಶನದ ವಿಶಿಷ್ಟ ಅಂಶಗಳನ್ನೂ

ಹಿಂದೂಧರ್ಮ ತನ್ನಲ್ಲಿ ಅರ್ಗಿಸಿ ಅರಗಿಸಿಕೊಂಡಿದ್ದರಿಂದ ಬೌದ್ಧ ಧರ್ಮ ಭಾರತದಲ್ಲಿ ಚರಿತಾರ್ಥವಾಯಿತು. ಎಲ್ಲಿ ಬೌದ್ಧಧರ್ಮದ ಆವಶ್ಯಕತೆಯೋ ಅಲ್ಲಿ ಅದು ತನ್ನ ಆವಾಸ ಮಾಡಿಕೊಂಡಿತು. ಇದರ ಅರ್ಥವೆಂದರೆ ಬೌದ್ಧಧರ್ಮ ಎನ್ನುವುದು ಹಿಂದೂಧರ್ಮದ ಒಂದು ನೋಟವೇ ಹೊರತು ಪೂರಾ ಹಿಂದೂಧರ್ಮದಿಂದ ಭಿನ್ನವಲ್ಲ

ಅಂದಿನ 'ಹಿಂದೂ ಸಮಾಜ'ದಲ್ಲಿ ಅಂದರೆ, ತಾವೇ ಹಿಂದೂಗಳು, ಬೌದ್ಧರಲ್ಲ ಎಂಬ ಹಿಂದೆ ಹೇಳಿದ ವ್ಯಾವರ್ತಕ ಸಾಮಾಜಿಕ ಪರಾಲ್ಯದಿಂದಾಗಿ ಬೌದ್ಧಧರ್ಮ ಹಿಂದೂಧರ್ಮದಿಂದ ಬೇರೆಯಾದ ಒಂದು ಸ್ವತಂತ್ರ ಧರ್ಮ ಎನ್ನುವ ಸಾಮಾಜಿಕ ಧೋರಣೆ ಬೆಳೆಯಿತಷ್ಟೆ. ಅದು ಹಿಂದೂಧರ್ಮದ ದರ್ಶನದ ನಿಜವಾದ ಅಂಶವಲ್ಲ. ಆಮೇಲೆ ಈ ಅಂಶ ಗಮನಕ್ಕೆ ಬಂದುದರಿಂದ ಬೌದ್ಧಧರ್ಮವನ್ನು ಹೊರ ಹಾಕಿದರೂ ಬೌದ್ಧದರ್ಶನ ಹಿಂದೂದರ್ಶನದ ಒಂದು ಅಂಗವಾಗಿ ಉಳಿದುಕೊಂಡಿವೆ. ಬೌದ್ಧಿಕ ಚರ್ಚೆಯ ಅಖಾಡಾಗಳಲ್ಲಿ ಗೆಲುವು–ಸೋಲು ಎರಡಕ್ಕೂ ಮರ್ಯಾದೆಯ ಪುರಸ್ಕಾರ ಎಂಬುದೇ ಹಿಂದೂ ಧರ್ಮ ಹಾಗೂ ದರ್ಶನದ ಜೀವಾಳ. ಏಕೆಂದರೆ ಯಾವೊಂದೂ ವಿಶ್ವದಲ್ಲಿ ನನ್ನನ್ನು ಬಿಟ್ಟಿಲ್ಲ. ನಾನು, ನೀನು ಆ ವಿಶ್ವಪತಿಯಿಂದ ಹೊರತೂ ಅಲ್ಲ; ಈ ಅನ್ಯೋನ್ಯಭಾವವೇ ಹಿಂದೂಧರ್ಮದ ಸ್ಥಾಯೀಭಾವ. ಹಿಂದೂಧರ್ಮ ವಿಶಾಲವಾದುದರಿಂದ ಉಳಿದೆಲ್ಲ

ದರ್ಶನಗಳೂ ಸಮಾವೇಶಗೊಳ್ಳುವಂತಹ ಅಂತಃಶಕ್ತಿ, ಹಾಗೂ ಔಚಿತ್ಯ ಹಿಂದೂಧರ್ಮದಲ್ಲಿ ಇದ್ದೇ ಇದೆ. ಎಷ್ಟೇ ವಿಚಾರ ಭೇದಗಳನ್ನಾದರೂ ಹಿಂದೂಧರ್ಮ ಸಹಿಸಿಕೊಳ್ಳುವುದೇ ಅದರ ಶಕ್ತಿ ಸಾಮರ್ಥ್ಯ!

**ಆಚಾರ ಸ್ವಾತಂತ್ರ್ಯ :**

ಹಿಂದೂಧರ್ಮ, ವಿಚಾರಕ್ಷೇತ್ರದಲ್ಲಿ ಸ್ವತಂತ್ರವಾಗಿರುವಂತೆಯೇ ಆಚಾರಗಳಲ್ಲೂ ಭೇದ ಪ್ರಭೇದಗಳನ್ನು ಸಹಜವಾಗಿಯೇ ಸಹಿಸಿ ಕೊಳ್ಳುತ್ತದೆ. ಇದೂ ಒಂದು ಹಿಂದೂಧರ್ಮದ ಅದ್ಭುತ ಶಕ್ತಿ !

**ಉದಾಹರಣೆಗೆ:–**

೧ ಬ್ರಾಹ್ಮಣಾದಿ ವರ್ಣಭೇದ;
೨ ಬ್ರಹ್ಮಚರ್ಯಾದಿ ಆಶ್ರಮಭೇದ;
೩ ಶೈವ ವೈಷ್ಣವಾದಿ ದೇವತಾಭೇದ;
೪ ದ್ವೈತ ಅದ್ವೈತ ವಿಶಿಷ್ಟಾದ್ವೈತಾದಿ ದರ್ಶನಭೇದ;
೫ ಕಬೀರ–ನಾನಕ್ ಮುಂತಾದ ಪಂಥಭೇದ;
೬ ರಾಮದಾಸ ಚೈತನ್ಯಾದಿ ಭಕ್ತಭೇದ;
೭ ಶ್ರೌತಸ್ಮಾರ್ತಾದಿ ಶಾಸ್ತ್ರಕರ್ಮಭೇದ;
೮ ಉತ್ಸರ್ಗ ಅಪವಾದಾದಿ ನಿಯಮಭೇದ : ಅಂದರೆ ಸಾಮಾನ್ಯ ಹಾಗೂ ವಿಶೇಷ ನಿಯಮಗಳ ಹೊಂದಾಣಿಕೆ
೯. ತೀರ್ಥ ಕ್ಷೇತ್ರಾದಿ ಸ್ಥಳಭೇದ;

ಎಂಬೀ ಅನೇಕ ಕಾರಣಗಳಿಂದ ಹಿಂದೂಧರ್ಮ ಆಚಾರಭೇದ ಗಳನ್ನು ಅವರವರಿಗೆ ಮಾನ್ಯಮಾಡಿದೆ. ಇದರಿಂದೇನೂ ಹಿಂದೂ ಧರ್ಮ ಮುಳುಗಿ ಹೋಗುವುದಿಲ್ಲ. ಅನೇಕ ಉಪನದಿಗಳು ಒಂದ ಕ್ಕೊಂದು ಸೇರಿ ಕೊನೆಗೆ ಸಮುದ್ರಕ್ಕೇ ಸೇರುವುವಷ್ಟೇ!

ಭಗವದ್ಗೀತೆ ಹೇಳುವಂತೆ, "ಸ್ವೇ ಸ್ವೇ ಕರ್ಮಣಿ ಅಭಿರತಃ ಸಂಸಿದ್ಧಿಂ ಲಭತೇ ನರಃ". ಅವರವರ ಆಚಾರದಲ್ಲಿದ್ದೂ ಪ್ರತಿ ಮಾನವನೂ ಗುರಿ ತಲುಪಬಹುದೆಂಬುದು ಗಮನಾರ್ಹ. ದ ರಿಂದಲೇ ಮಾನವನಲ್ಲಿ ಎಷ್ಟೇ ಆಚಾರಭೇದ ಇರಬಹುದಾದರೂ, ಅವು ಇತರರ ಆಚಾರಗಳಿಗೂ ಮಾನ್ಯತೆ ಕೊಟ್ಟಿವೆ ಎಂಬ ಅಂಶ ಇಲ್ಲಿ ನಮಗೆ ಸಿಗುವುದು. ಭಾರತದಲ್ಲಿ ಮನೆಗೆ ಅತಿಥಿ ಬಂದರೆ ತಲೆಗೆ ಟೊಪ್ಪಿಯನ್ನೋ ರುಮಾಲನ್ನೋ ಧರಿಸಿ ಸ್ವಾಗತಿಸಬಹುದು. ಅದೇ ಪಾಶ್ಚಾತ್ಯ ದೇಶಗಳಲ್ಲಿ ತಲೆಯ ಮೇಲಿನ ಹ್ಯಾಟನ್ನು ತೆಗೆದು ಸತ್ಕರಿಸಬಹುದು. ನಮ್ಮದು ಉಷ್ಣದೇಶ, ಅವರದು ಶೀತದೇಶ. ಬಂದ ಅತಿಥಿದೇವರಿಗಾಗಿ ನಾವೆಷ್ಟೇ ಕಷ್ಟವನ್ನು ಸಹಿಸಬೇಕಾಗಿ ಬಂದರೂ ಸಂತೋಷದಿಂದ ಅದನ್ನು ಸುಖವೆಂದೇ ಭಾವಿಸುವ ಒಂದೇ ಜೀವಾಳ ಈ ಆಚಾರಭೇದಗಳ ಹಿಂದೆ ಅಡಗಿದೆ.

ಒಟ್ಟಿನಲ್ಲಿ, ಹಿಂದೂಧರ್ಮ ಸರ್ವಾಚಾರ–ವಿಚಾರಗಳ ಒಂದು ಸಂಗ್ರಾಹಕ ಧರ್ಮವೇ ಹೊರತು ನಾನೇ ಹಿಂದೂ, ನೀನು ಹಿಂದೂವಲ್ಲ

ಎಂಬುವ ವಿಗ್ರಾಹಕ ಧರ್ಮವಲ್ಲ ! ಸರ್ವಧರ್ಮಗಳ ಅನ್ಯೋನ್ಯ ಭಾವವೇ ಹಿಂದೂಧರ್ಮದ ಶಾಸ್ತ್ರೀಯ ಹಾಗೂ ದಾರ್ಶನಿಕಾರ್ಥ.

ಸ್ಥೂಲದೃಷ್ಟಿಯಿಂದ ನೋಡಿದಾಗ ಘಟ ಪಟವಾಗಲಾರದು. ಮಡಕೆಯೇ ಬೇರೆ, ಬಟ್ಟೆಯೇ ಬೇರೆ. ಆದರೆ ಈ ವ್ಯಾವರ್ತಕ ದೃಷ್ಟಿ ಮಾನವ–ಮಾನವರಲ್ಲಿ ಶೋಭಿಸದು. ತಾಯಿಯನ್ನು ಕಂಡ ಯಾವೊಂದು ಮಗುವೂ 'ಈಕೆ ನನ್ನ ತಾಯಿ' ಎನ್ನುತ್ತದೆಯೇ ಹೊರತು 'ಇವಳು ಹಸುವಲ್ಲ' ಎಂದು ಹೇಳದು. ತಾಯಿಯೂ ತನ್ನ ಕಂದನನ್ನು 'ನನ್ನ ಮಗು' ಎನ್ನುತ್ತಾಳೆಯೇ ಹೊರತು 'ಇದು ನಾಯಿಯಲ್ಲ' ಎಂದು ಎದಿಗೂ ಹೇಳಳು. ಅಂತೆಯೇ 'ಹಿಂದೂ ಮುಸಲ್ಮಾನ್ ಅಲ್ಲ, ಮುಸಲ್ಮಾನ್ ಹಿಂದೂವಲ್ಲ' ಎನ್ನುವುದು ದೇವರು ಮಾನವರಿಗೆ ಕೊಟ್ಟಿರುವ ಅಮೂಲ್ಯ ಬುದ್ಧಿಶಕ್ತಿಯನ್ನೇ ಅಲ್ಲಗಳೆದಂತೆ. ಈ ಅನ್ಯೋನ್ಯ–ಅಭಾವ ವ್ಯಾವರ್ತಕ ದೃಷ್ಟಿಯಿಂದ ಜಗತ್ತನ್ನು ನೋಡುವುದೇನೂ ಜಾಣತನವಲ್ಲವೇ ಅಲ್ಲ.

ಬಡಗಿಯೊಬ್ಬ ಬೇಸಾಯ ಮಾಡನು; ರೈತ ಮರದ ಕೆಲಸ ಮಾಡನು. ಇದರಿಂದ ಇಬ್ಬರೂ ಕಡಿಮೆ ದರ್ಜೆಯವರೇನು ? ನೇಕಾರನಲ್ಲಿ ಕೃಷಿಕನ ಅಭಾವವನ್ನಾಗಲೀ, ಕೃಷಿಕನಲ್ಲಿ ನೇಕಾರನ ಅಭಾವವನ್ನಾಗಲೀ ಕೀಳ್ಮೆಯೆಂದು ಜಾಣರಾದವರು ಎಂದೂ ಭಾವಿಸುವುದಿಲ್ಲ. ಸಾಮಾಜಿಕ ಓಟ ಮುಂದುವರಿದು ಸರ್ವಕ್ಷೇಮ

ಬೇಕಿದ್ದರೆ ವ್ಯಕ್ತಿ–ವ್ಯಕ್ತಿಯಲ್ಲಿ ಈ ಅನ್ಯೋನ್ಯ ಅಭಾವಕ್ಕೆ ಬದಲು ಅನ್ಯೋನ್ಯ ಭಾವವೇ ಬುದ್ಧಿವಂತಿಕೆ! ಪರಸ್ಪರ ಆದರ ಭಾವ ಜಗತ್ತಿನಲ್ಲಿ ನಷ್ಟವಾಗಿ ಹೋಗುವಂತಹ ದೃಷ್ಟಿಕೋಣವನ್ನೇ ನಾವು ಬಿಟ್ಟುಕೊಡ ಬೇಕು. ಇಲ್ಲದಿದ್ದರೆ ಸಭೆಗಳಲ್ಲಿ, ಸಂಘ–ಸಂಸ್ಥೆಗಳಲ್ಲಿ, ಪತ್ರಿಕೆಗಳಲ್ಲಿ, ಜೀವನದ ಎಲ್ಲಾ ಕ್ಷೇತ್ರಗಳಲ್ಲೂ ಒಡಕೇ ಒಡಕು! ಬಿರುಕೇ ಬಿರುಕು!

ಜಗತ್ತಿನಲ್ಲಿ ಪ್ರಚಲಿತ ರೂಢಿಯಲ್ಲಿರುವ ಪರಸ್ಪರ ಅಭಾವ, ಅಂದರೆ ಅವನು ಇವನಂತಿಲ್ಲ, ಈಕೆಯೇ ಬೇರೆ, ಆಕೆಯೇ ಬೇರೆ ಎಂಬ ದುಷ್ಟ ಮೌಲ್ಯವನ್ನು ಭಗವದ್ಗೀತೆಯ 'ಸದ್ಭಾವ, ಸಾಧು ಭಾವ' ಇವೆರಡೂ, ನಾಶಮಾಡುವುದೇನೋ ಖಂಡಿತ! ಸಾಮಾಜಿಕ ದೃಷ್ಟಿಯಿಂದ ನಿರಪವಾದವಾಗಿ ಯಾವಾಗಲೂ ಎಲ್ಲೆಲ್ಲೂ ಎಲ್ಲರಲ್ಲೂ ಸದ್ಭಾವನೆಯೇ ಸರಿ. ವ್ಯಾವರ್ತಕ ಭಾವನೆ ಖಂಡಿತ ಸರಿಯಲ್ಲ. ಅನ್ಯೋನ್ಯಾಭಾವ ದೃಷ್ಟಿಯಿಂದ ಯಾವೊಂದು ಒಳ್ಳೆಯ ಕೆಲಸವೂ ಹುಲ್ಲುಕಡ್ಡಿಯಷ್ಟೂ ಆಗದು. ವಿರಸವೇ ಬೆಳೆದು ಪಾಪ ಕೂಪಗಳನ್ನೇ ತೋಡುತ್ತೇವೆಯಷ್ಟೇ. ಸತ್ಯಹತ್ಯೆ, ಸತ್‌ಕಾರ್ಯಹತ್ಯೆಯಾಗಲು ಮಾನವ ತರ್ಕಶಕ್ತಿಯನ್ನು ಉಪಯೋಗಿಸಲೇಬಾರದು. ಕೇವಲ ಬೌದ್ಧಿಕ ತರ್ಕದಿಂದ ಏನೇನೂ ಸಾಗದು.

ಮೂರ್ತಿಪೂಜೆಯ ರಹಸ್ಯ :

ವಿಶ್ವದ ಯಾವೊಂದು ಸಣ್ಣ ವಸ್ತುವೂ ಇಡೀ ವಿಶ್ವದ ಸಂಪೂರ್ಣವೇ! ಹಾಗೆ ನೋಡಿದರೆ ಪ್ರತಿಯೊಂದು ಸಾಮಾನೂ, ಪ್ರತಿಯೊಂದು ಪ್ರಾಣಿ, ಪ್ರತಿ ಮಾನವನೂ ಸಮಗ್ರ ವಿಶ್ವವೇ! ಯಾವುದೊಂದೂ ವಿಶ್ವದ ಚೂರುಪಾರಲ್ಲ, ಅಂಶ ಮಾತ್ರ ಅಲ್ಲ. ಒಂದು ಸಣ್ಣ, ಕ್ಷುದ್ರಾತಿಕ್ಷುದ್ರ ಅಣುವನ್ನು ವಿಶ್ಲೇಷಿಸಿದಾಗ ಇಡೀ ವಿಶ್ವದ ಸಮಸ್ತ ಶಕ್ತಿಯೂ ಅಷ್ಟರಲ್ಲೇ ತುಂಬಿರುವುದು ಗೋಚರಿಸುತ್ತದೆ. ಒಂದು ಮೇಜು ಇದೆ ಎನ್ನಿ. ಮುಂದುಗಡೆಯಿಂದ ಫೋಟೋ ತೆಗೆದರೆ ಒಂದು ಬಗೆ! ಕೆಳಗಿನಿಂದ, ಮೇಲಿನಿಂದ ಅದೇ ಮೇಜಿನ ಫೋಟೋ ಬೇರೆಬೇರೆ ಕಾಣಬಹುದು. ಪ್ರಕಾರಭೇದ, ಆಕಾರಭೇದ, ಉಭಯಭೇದ, ಇವೆರಡಕ್ಕಿಂತಲೂ ವಿಲಕ್ಷಣವಾದ 'ಜಾತಿಭೇದ'! ಹೀಗೆ ಅನಂತಾನಂತ ಫೋಟೋಗಳಲ್ಲೂ ವಿವಿಧತೆ ಕಾಣಬಹುದೇ ಹೊರತು ಮೇಜವೊಂದೇ! ಸಾರಾಂಶವೆಂದರೆ ಒಂದೇ ಮೂಲವಸ್ತು, ಅದರದೇ ನಾನಾ ಆಕಾರ, ಪ್ರತಿಮೆಗಳು. ಇವೇ ವಿಸ್ತಾರವಾದ ಜಗತ್ತು.

ಮೂಲವಸ್ತು ಮರೆತು ಬರೀ ಬಾಹ್ಯಾಕಾರಗಳ ದೃಷ್ಟಿಯಿಂದ ನೋಡುವ ಪದ್ಧತಿ ಮೌಲಿಕವಾಗದು. ನಿಜ, ನಾನೂ, ನನ್ನ ಸಹೋದರನೂ ಒಂದೇ ತೆರ ಎನ್ನುವುದು ಗೊತ್ತಾಗುತ್ತದೆ. ಆದರೆ

ನಾನೂ, ಆ ಎತ್ತೂ ಒಂದೇ ತೆರ ಎನ್ನುವುದು ಸುಲಭವಾಗಿ ಕಾಣದು. ನಾನೂ, ಆ ಕಲ್ಲೂ ಒಂದೇ ಸಮಾನವೆನ್ನುವುದಂತೂ ಬಲು ಕಠಿಣ: ಅಂದರೆ, ವಿಶ್ವಪ್ರಕೃತಿಯ ಮೂಲ ಅಧಿಷ್ಠಾನ ಚೈತನ್ಯ, ಆ ಪರಮ ಚೈತನ್ಯವನ್ನು ಗುರುತಿಸುವ ಶಕ್ತಿ ನನ್ನ ಬುದ್ಧಿಯನ್ನು ಸ್ಪರ್ಶಿಸಿಲ್ಲ ಎಂದೇ ಅರ್ಥ. ಭಕ್ತರು ಪೂಜಿಸುವ ಸಾಲಿಗ್ರಾಮದಲ್ಲಿ, ಕಲ್ಲಿನ ಶಿಲಾಭಾಗವೇ ಕಂಡೀತು! ಅದೂ ಹೆಚ್ಚಾಗಿಯೇ! ಆದರೂ ಸಾಲಿಗ್ರಾಮ, 'ಸಣ್ಣದಾಗಿರುವ ಇಡೀ ಬ್ರಹ್ಮಾಂಡದ ಸಂಕುಲವೇ! ಇಡೀ ಸಮಗ್ರ ವಿರಾಟ್ 'ಕಾಸ್ಮಿಕ್' ಪ್ರತಿನಿಧಿಯಾಗಿ ಸಾಲಿಗ್ರಾಮ ಇದೆ. ೧/೨, ೨/೪, ೬/೧೨ ಇತ್ಯಾದಿ, ಲೆಕ್ಕವಿಲ್ಲದಷ್ಟು ಕಂಡರೂ ಗಣಿತಶಾಸ್ತ್ರಜ್ಞರ ಸರಿಯಾದ ದೃಷ್ಟಿಯಲ್ಲಿ ಬೆಲೆ ಒಂದೇ! ಅದೇ ರೀತಿ, ಪ್ರಪಂಚದ ಪ್ರತ್ಯೇಕ ಪ್ರತ್ಯೇಕ ಆಕಾರವೂ ಸಮಾನ ಮೌಲ್ಯವುಳ್ಳದ್ದೇ. ಮಾನವ ಸಮಾಜಶಾಸ್ತ್ರಜ್ಞನಾದ ಪಕ್ಷದಲ್ಲಿ ಯಾವೊಂದರಲ್ಲೂ, ಯಾವೊಬ್ಬನಲ್ಲೂ ಸುತರಾಂ ಅನ್ಯೋನ್ಯ-ಅಭಾವವನ್ನು ಹೆಚ್ಚಿಸಲಾರ. ಯಾವುದೇ ಬಗೆಯ 'ಪಾರ್ಟಿ' ಮಾಡಲಾರ.

ವೇದಮಂತ್ರಗಳಿಂದ ಸಾಲಿಗ್ರಾಮ ಮೂರ್ತಿಗಳಲ್ಲಿ ಮೂಲ ಸರ್ವ ಶಕ್ತಿಯ ಆವಾಹನೆಯಾಗಿದೆ ಎನ್ನುವುದಕ್ಕಿಂತಲೂ ಅದೇ ವೇದಮಂತ್ರಗಳಿಂದ ಪರಿಪೂರ್ಣ ಪರಾಶಕ್ತಿಯನ್ನು ತನ್ನ ಹೃದಯ

ದಲ್ಲೇ ಪ್ರತಿಷ್ಠಾಪಿಸಿಕೊಳ್ಳುವುದು ಸರಿಯಾದ ಪ್ರಕ್ರಿಯೆ. ತಪ್ಪಲೆಯ ಅನ್ನ ಬೆಂದಿದೆಯೇ ಇಲ್ಲವೇ ಒಂದಗುಳು ತೋರಿಸುವುದು. ನನ್ನಲ್ಲಿ ಬ್ರಹ್ಮಸಾನ್ನಿಧ್ಯ ಕಾಣದೆ ಬೇರೆಲ್ಲಿ ತಾನೇ ಅದು ಕಂಡೀತು ? ಮೂರ್ತಿಯೆಂಬುದು ಒಂದು ದಾರ, ಸೂತ್ರದಂತೆ. ಒಂದೊಂದರಲ್ಲೂ ಅಲ್ಲಿರುವ ಮೂಲ ನಮಗೆ ಕಂಡಾಗಲೇ ಇಡೀ ಜಗತ್ತು ಕಾಣಲು ಸಿಕ್ಕೀತು. ಜಗತ್ತು ಆ ಬ್ರಹ್ಮಸೂತ್ರದ ಭಾಷ್ಯ!

**ಹಿಂದೂಧರ್ಮದ ವಿಶ್ವಸಂಗ್ರಾಹಕತೆ:**

ಪಾಶ್ಚಿಮಾತ್ಯರ ತರ್ಕ ಶಾಸ್ತ್ರದಲ್ಲಿಯೂ "ದ್ವೈತೀಕರಣ" – ಅದು ಬೇರೆ ಇದು ಬೇರೆ ಎಂಬ ಆತ್ಯಂತಿಕ (ಡಿವಿಜನ್ ಬೈ ಡೈಕಾಟಮಿ) ಒಂದು ಸುಲಭ ಪದ್ಧತಿಯನ್ನು ತರಲಾಗಿದೆ. ಈ ಕ್ರಮ ಅನ್ಯೋನ್ಯಾಭಾವ ಸಿದ್ಧಾಂತವೇ ಆಗುತ್ತದೆ. ಪ್ರಪಂಚದ ಯಾವುದೇ ಒಂದು ವಸ್ತು ಒಂದು ಕಡೆಯಾದರೆ ತದಿತರ ಸರ್ವವೂ ಇನ್ನೊಂದು ಕಡೆ ಎಂಬೀ ನೀತಿಗೆ "ದ್ವೈತೀಕರಣ" ಎಂದು ಹೆಸರು. ಘಟ+ಘಟೇತರ=ವಿಶ್ವರೂಪ. ಹೀಗೆ ವರ್ಗೀಕರಣ ಮಾಡುವುದು ವಿರೂಪೀಕರಣದ ಒಂದು ಬಗೆಯೇ ಸರಿ.

ಪೌರಸ್ತ್ಯ ವೈಶೇಷಿಕ ಶಾಸ್ತ್ರಜ್ಞರು ಪ್ರತಿಯೊಂದು ವಸ್ತುವಿನಲ್ಲೂ ತದಿತರ ವಸ್ತುಗಳಲ್ಲಿಲ್ಲದ ಒಂದು ವಿಶೇಷ ಇದೆ ಎನ್ನುತ್ತಾರೆಯಾದರೂ 'ಎಲ್ಲದರಲ್ಲೂ ಒಂದು ಸಾಮಾನ್ಯ ಎಂಬ ಧರ್ಮವನ್ನು

ಒಪ್ಪುತ್ತಾರೆ. ವಿಶ್ವದ ಏಕತೆ ಅಥವಾ ಐಕ್ಯವನ್ನು ಒಪ್ಪದಿದ್ದರೂ ಅಂಶತಃ ಸಾಮಾನ್ಯ ಅಂದರೆ ಸಾಮ್ಯವನ್ನು ಒಪ್ಪುತ್ತಾರೆ. ಎಷ್ಟೆಷ್ಟು ಅಂಶದಲ್ಲಿ ವಸ್ತುವಸ್ತುಗಳಲ್ಲಿ ಹೋಲಿಕೆಯ ಸಾಮ್ಯ ಇರುತ್ತದೆಯೋ ಆ ಅಂಶಗಳಲ್ಲಾದರೂ, ಅನ್ಯೋನ್ಯಾಭಾವ ರೂಪ ಆತ್ಯಂತಿಕ ಭೇದ ವಿಲ್ಲವಷ್ಟೆ. ಆದುದರಿಂದಲೇ ಎಲ್ಲ ವೈಶೇಷಿಕ ಶಾಸ್ತ್ರಜ್ಞರೂ ಈ ಅನ್ಯೋನ್ಯಾಭಾವ ಎಂಬ ಪದಾರ್ಥಕ್ಕೆ ಮಾನ್ಯತೆ ನೀಡಿಲ್ಲ. ಆ ವಿಶಿಷ್ಟ ಅಭಾವ ಪೂಜಿಸುವ ಪಂಥವೂ ಸ್ಥೂಲಾರ್ಥದಲ್ಲೇ ಹೊರತು ಸೂಕ್ಷ್ಮಾರ್ಥದಲ್ಲಿ ಅಲ್ಲ.

ಆದರೆ ಇಂದಿನ ಜಗತ್ತಿನ ವಾಯುಮಂಡಲ ಈ ಅಭಾವ ಪೂಜೆ ಯನ್ನು ತಮತಮಗೆ ಅನುಕೂಲವಾಗಲೆಂಬ ದೃಷ್ಟಿಯಿಂದ ಅಥವಾ ಈ ದ್ವೈತೀಕರಣವಿದ್ದಷ್ಟೂ ತಮಗೆ ಅನುಕೂಲವೇ ಎಂಬ ಸ್ವಾರ್ಥ ದೃಷ್ಟಿಯಿಂದ ದ್ವೈತದ ನಿರಂಕುಶ ಸಾಮ್ರಾಜ್ಯವನ್ನೇ ಹರಡಿ ಎಲ್ಲೆಲ್ಲೂ ಸ್ಥಾಪಿಸುತ್ತಿದೆ. ರಾಷ್ಟ್ರ ರಾಷ್ಟ್ರಗಳಲ್ಲಿ ಈ ಆತ್ಯಂತಿಕ ಭೇದ ಹೆಚ್ಚುತ್ತಿದೆ. ಸ್ವದೇಶಾಭಿಮಾನವೂ ಸ್ವದೇಶಾತಿಮಾನದಲ್ಲಿ ಬೆಳೆಯು ತ್ತಿದೆ. ಇಂಗ್ಲೆಂಡಿನ ಸ್ವದೇಶೀವ್ಯಾಖ್ಯೆ ತದಿತರ ಜರ್ಮನಿ, ಫ್ರಾನ್ಸ್, ರಷ್ಯಾ, ಪಾಕಿಸ್ಥಾನ, ಹಿಂದೂಸ್ಥಾನಗಳ ಅಭಾವವೆಂದೇ! ಅದರ ಅನುಕರಣೆಯನ್ನೇ ತಮ್ಮ ತಮ್ಮ ಯಥಾಶಕ್ತಿ ಬೇರೆ ಬೇರೆ ರಾಷ್ಟ್ರಗಳೂ ಮಾಡುತ್ತಿವೆ. ಇನ್ನೊಬ್ಬರು ಪ್ರಪಂಚದಲ್ಲೇ ಇಲ್ಲದಂತೆ

ಮಾಡುವುದು ಹೇಗೆ, ಇದೇ ಎಲ್ಲರ ಯೋಚನೆಯಾಗಿದೆ. ತಮ್ಮ ಬಲವೃದ್ಧಿ ಎಂದರೆ ಶತ್ರುವಿನ ಬಲಕ್ಷಯವೇ ಎಂಬುದೇ ಸರ್ವ ಮಾನ್ಯವಾಗಹತ್ತಿದೆ. ಈ ಅಂಧಾನುಕರಣೆಯಲ್ಲೇ ಜಗತ್ತಿನ ರಾಜಕೀಯ ಸಾಗುತ್ತಿದೆ.

ಆದರೆ ಹಿಂದೂ ಧರ್ಮದ ರಚನೆ ಮಾತ್ರ ಕುರುಡಾ ಅನ್ಯೋನ್ಯಾಭಾವದ ಮೇಲೆ ನಿಂತಿಲ್ಲ. ವಸ್ತು ವಸ್ತುಗಳಲ್ಲಿ, ಜೀವ ಜೀವಗಳಲ್ಲಿ ಸಾಮ್ಯವೂ ಇದೆ, ಏಕತೆಯೂ ಇದೆ. ಎಲ್ಲವೂ ಪರಿ ಪೂರ್ಣ. ಆದರೂ ಇನ್ನೊಂದರ ಅಂಶ. ಉದಾಹರಣೆಗೆ, ನಮ್ಮ ನಮ್ಮ ಪರಿವಾರ ಒಂದು ಚಿಕ್ಕ ವಿಶ್ವಸಮಾಜವೇ ಹೌದು. ಆದರೂ ವಿಶ್ವದ ಒಂದು ಅಂಶವೂ ಹೌದು. ಆದುದರಿಂದ ಪರಿವಾರದ ವ್ಯಕ್ತಿ ವ್ಯಕ್ತಿಯಲ್ಲಾಗಲೀ, ಇಡೀ ವಿಶ್ವಸಮಾಜದಲ್ಲಾಗಲೀ ಈ ಅನ್ಯೋನ್ಯಾ ಭಾವವನ್ನು ಕಣ್ಣುಮುಚ್ಚಿಕೊಂಡು ಯಾರೂ ಒಪ್ಪುವಂತಿಲ್ಲ. ಇದರಲ್ಲಿ ವಿವೇಕ ಬೇಕು. ಚಿಕ್ಕ ಚಿಕ್ಕ ಪ್ರತಿಯೊಂದೂ ವಿಶ್ವವೂ ಹೌದು, ವಿಶ್ವಾಂಶವೂ ಹೌದು. ಇದನ್ನು ಚೆನ್ನಾಗಿ ಅರಿತೇ ಪರಸ್ಪರ ವಸ್ತುಭೇದ ಅನ್ಯೋನ್ಯಾಭಾವವನ್ನು ವಿಶ್ಲೇಷಿಸಬೇಕು. ಯಾವುದ ರಲ್ಲೂ ಪೂರ್ಣ ಅಂಧರಾಗಬಾರದು,

ಎಲ್ಲಾ ಬಗೆಯ ಧರ್ಮವಿಧಿವಿಧಾನಗಳೂ ಅತ್ಯಂತಿಕ ಭೇದವನ್ನು ಸರ್ವಾತ್ಮನಾ ಒಪ್ಪದೇ ಅಂಶತಃ ಒಪ್ಪಿವೆ. ಹಿಂದೂಧರ್ಮದ

ರಚನೆಯೂ ಕೂಡ ಈ ವಿಶ್ವಸಂಗ್ರಾಹಕ ದೃಷ್ಟಿಯಿಂದಲೇ ವಿಕಾಸಗೊಳ್ಳುತ್ತಾ ಹೋಗಿದೆ. ಅಂತೆಯೇ ಸಕಲ ಧರ್ಮಗಳ ಆಚಾರ ವಿಚಾರಗಳಿಗೆ ಹಿಂದೂಧರ್ಮದಲ್ಲಿ ಅವಕಾಶವಿದ್ದೇ ಇದೆ.

"ಯೋ ಯೋ ಯಾಂ ಯಾಂ ತನುಂ ಭಕ್ತ: ಶ್ರದ್ಧಯಾರ್ಚಿತುಮಿಚ್ಛತಿ;
ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ"

ಯಾವ ಯಾವ ರೂಪದಲ್ಲಿ ಭಕ್ತಿ, ಶ್ರದ್ಧೆಗಳಿಂದ ವಿರಾಟ್ ವಿಶ್ವಪತಿಯನ್ನು ಯಾರು ಯಾರು ಪೂಜಿಸುತ್ತಾರೋ ಅವರವರಿಗೆ ಆಯಾಯಾ ರೂಪದಲ್ಲೇ ಅಚಲ ಶ್ರದ್ಧೆಯನ್ನು ಭಗವಂತನು ಸ್ಥಿರಗೊಳಿಸುತ್ತಾನೆ. ಇದು ಹಿಂದೂಧರ್ಮದ ಮೂಲ ಪ್ರತಿಜ್ಞೆ. ಈ ಪ್ರತಿಜ್ಞಾಭಂಗವಾಗುವಂತೆ ಹಿಂದೂಧರ್ಮಕ್ಕೆ 'ಅವರಿವರು ಹಿಂದೂಗಳಲ್ಲ' ಎಂಬ ಅರ್ಥಮಾಡಲು ಬರುವುದೇ ಇಲ್ಲ.

ಪ್ರಕೃತಿ ಸೃಷ್ಟಿಯಲ್ಲಿ ಸಮನ್ವಯ :

ವ್ಯಾಸರ ಬ್ರಹ್ಮಸೂತ್ರ ಸಮನ್ವಯಕ್ಕಾಗಿಯೇ ಹುಟ್ಟಿಕೊಂಡಿತು. ಬ್ರಹ್ಮಸೂತ್ರದ ೨ನೇ ಅಧ್ಯಾಯದ ೨ನೇ ಪಾದದಲ್ಲಿ "ನಾऽಭಾವ ಉಪಲಬ್ಧೇಃ" ಎಂಬುದೊಂದು ಸುಂದರವಾದ ಸಮನ್ವಯ ಸೂತ್ರ! ಈ ಲೇಖನದ ಹಿಂದಿನ ಸರ್ವಾರ್ಥವನ್ನು ಸಾರ ಸಂಕ್ಷೇಪವಾಗಿ ಇಡಬೇಕೆಂದರೆ ಈ ಒಂದು ಸೂತ್ರ ಸಾಕು.

'ಅನ್ಯೋನ್ಯಾಭಾವ' ಎಂಬುದಿಲ್ಲ. ಒಳಸೃಷ್ಟಿಯಾದ ಜ್ಞಾನ, ಹೊರ ಸೃಷ್ಟಿಯಾದ ವಸ್ತು ಇವೆರಡರಲ್ಲೂ ಸಂಪೂರ್ಣವಾಗಿ ಪರ್ಗೀಕರಣ ಸಾಧ್ಯವಿಲ್ಲ. ಅಂತರ್‌ಜ್ಞಾನಕ್ಕೂ, ಬಾಹ್ಯಾರ್ಥಕ್ಕೂ ಬಿಡಿಸಲಾರದ ಸಂಬಂಧವಿರುವಾಗ ಆತ್ಯಂತಿಕ ಅನ್ಯೋನ್ಯಾಭಾವ ಹಿಂದೆ ಹೇಳಿದ. 'ಡಿವಿಶನ್ ಬೈ ಡೈಕಾಟಮಿ' ದ್ವೈತೀಕರಣ ಪದ್ಧತಿ, ಪ್ರಾಸಸಮ್ಮತ ವಲ್ಲ. ಒಂದು ವಿಭಾಗದಲ್ಲಿ ಇನ್ನೊಂದರ ಅಭಾವ ಸುತರಾಂ ಇರಲು ಸಾಧ್ಯವೇ ಇಲ್ಲ. ಪರಸ್ಪರಗಳಲ್ಲಿ ಪರಸ್ಪರವೂ ಕಾಣುತ್ತಿರುವುದ ರಿಂದಲೇ ಅಭಾವಃ – ನ. ಹೀಗೆ ಸನಾತನ ಸಮನ್ವಯ ದೃಷ್ಟಿಯನ್ನು ಒಪ್ಪುವುದಾದರೆ "ಹಿಂದೂಧರ್ಮದಲ್ಲಿ" ಅನ್ಯಧರ್ಮಗಳ ಅಭಾವವೆಂಬು ದನ್ನು ನಾವು ಹೇಳುವಂತಿಲ್ಲ.

## ಹಿಂದೂ ಧರ್ಮ ಗ್ರಂಥ

ಗ್ರಂಥ ಪ್ರಾಮಾಣ್ಯದ ಮೇಲೆ ಹಿಂದೂಧರ್ಮದ ರಚನೆ ನಿಂತಿಲ್ಲ. ಶ್ರೌತಸಾಹಿತ್ಯದಲ್ಲಿ ರಚನೆಯು ಮಾತೇ ಬರುವುದಿಲ್ಲ. ಆಮೇಲಿನ ಸ್ಮೃತಿ ಸಂಬಂಧಿ ಸ್ಮಾರ್ತ ಸಾಹಿತ್ಯಗಳಲ್ಲಿ ರಚನೆಯ ಲಕ್ಷಣ ಗಳೂ ಬಲು ಕಡಿಮೆಯಾಗಿಯೇ ದೊರಕುತ್ತವೆ. "ಹಿಂದೂಧರ್ಮ ಆದಕ್ಕೆ ಒಂದು ರಚನೆ" ಎನ್ನುವುದೇ ವಿರೋಧಾಭಾಸ. ಹಿಂದೂ ಧರ್ಮಕ್ಕೆ ಸಂಬಂಧಿಸಿದಂತೆ ಅನೇಕ ಗ್ರಂಥಗಳುಂಟು. ಆದರೆ ಹಿಂದೂ ಧರ್ಮ ಯಾವೊಂದು ಗ್ರಂಥದಿಂದಲೂ ಬದ್ಧವಲ್ಲ! ಋಗ್ವೇದಾದಿ

ನಾಲ್ಕು ವೇದಗಳೂ, ಬ್ರಾಹ್ಮಣ ಭಾಗಗಳೂ, ಉಪನಿಷತ್, ಸ್ಮೃತಿ ಗ್ರಂಥಗಳೂ, ರಾಮಾಯಣ ಭಾರತಾದಿ ಇತಿಹಾಸ, ಪುರಾಣ, ಸೂತ್ರ, ದರ್ಶನ, ಭಾಷ್ಯಗಳೂ ಇತ್ಯಾದಿ ಸಂಸ್ಕೃತ ಗ್ರಂಥಗಳೂ, ನಾನಕರ ಗ್ರಂಥಸಾಹಬ್, ಕಬೀರರ ಬೀಜಕ ಗ್ರಂಥ, ತುಳಸೀ ರಾಮಾಯಣ, ತುಕಾರಾಮರ ಗಾಥ ಇತ್ಯಾದಿ ದೇಶಭಾಷಾ ಗ್ರಂಥಗಳೂ ಹೆಚ್ಚೂ ಕಡಿಮೆ ಹಿಂದೂಧರ್ಮಕ್ಕೆ ಸಂಬಂಧಪಟ್ಟವೇ ಆದರೂ ಹಿಂದೂಧರ್ಮ ಈ ಯಾವ ಒಂದು ಗ್ರಂಥದ್ದೂ ಅಲ್ಲ. ಈ ಗ್ರಂಥಗಳೂ ಹಿಂದೂ ಧರ್ಮವೂ ಬೇರೆ ಬೇರೆ ಅಲ್ಲ. ಎರಡರಲ್ಲೂ ಅದ್ವೈತ. ಅದು ಶಂಕರಾಚಾರ್ಯರು ಷಟ್ಪದಿಯಲ್ಲಿ ಹೇಳುವ ರೀತಿಯ ಅದ್ವೈತ.

ಸತ್ಯಪಿ ಭೇದಾಪಗಮೇ ನಾಥ ತವಾಹಂ, ನ ಮಾಮಕೀನಸ್ತ್ವಮ್।
ಸಾಮುದ್ರೋ ಹಿ ತರಂಗಃ, ಕ್ವಚನ ಸಮುದ್ರೋ ನ ತಾರಂಗಃ॥

"ಓ ಭಗವನ್ ! ನಿನ್ನಲ್ಲೂ ನನ್ನಲ್ಲೂ ಅದ್ವೈತದ ಸಂಬಂಧ ಇದ್ದರೂ ನಾನು ನಿನಗೆ ಸೇರಿದವನೇ ಹೊರತು, ನೀನು ನನಗೆ ಸೇರಿದವನಲ್ಲ. ವ್ಯವಹಾರದಲ್ಲಿ ನೋಡಿ! ಅಲೆಗಳು ಸಮುದ್ರಕ್ಕೆ ಸಂಬಂಧಪಟ್ಟವೇ ಹೊರತು ಸಮುದ್ರ ಅಲೆಗಳದು ಎಂದು ಯಾರೂ ಬ್ಬರೂ ಹೇಳರಷ್ಟೆ." ಇದೇ ನ್ಯಾಯ ಹಿಂದೂಧರ್ಮಕ್ಕೂ, ಗ್ರಂಥ ಗಳಿಗೂ ಅನ್ವಯವಾಗುತ್ತದೆ.

Funding: Tattva Heritage Foundation,Kolkata. Digitization: eGangotri.


ವೇದ ಪ್ರಾಮಾಣ್ಯದ ಭಾವ

ವೇದಪ್ರಾಮಾಣ್ಯವನ್ನು ಹಿಂದೂಧರ್ಮದ ಒಂದು ವಿಶಿಷ್ಟ ಲಕ್ಷಣವನ್ನಾಗಿಯೇ ಪಂಡಿತರು ತಿಳಿಯುವರು. ಭಗವಂತನಲ್ಲಿ ನಂಬಿಕೆಯಿಲ್ಲದಿದ್ದರೂ ಪರವಾಗಿಲ್ಲ. ವೇದದಲ್ಲಿ ಮಾತ್ರ ನಂಬಿಕೆ ಇರಲೇಬೇಕು! ಇದರ ಅರ್ಥವೇನಾಗುತ್ತದೆ? ಆಸ್ತಿಕ ಷಡ್‌ದರ್ಶನಗಳಾದ ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಪೂರ್ವಮೀಮಾಂಸೆ, ಉತ್ತರಮೀಮಾಂಸೆ, ಇವೂ, ತದ್ ಭಿನ್ನಗಳಾದ ನಾಸ್ತಿಕಗಳೆನ್ನುವ ಷಡ್‌ದರ್ಶನಗಳೂ ಅಂದರೆ, ಚಾರ್ವಾಕ, ಬುದ್ಧ, ಸುಗತ, ಯೋಗಾಚಾರ, ಮಾಧ್ಯಮಿಕ, ಜೈನ ಇವೆರಡನ್ನೂ ಹೀಗೆ ಆಸ್ತಿಕ – ನಾಸ್ತಿಕ ಎಂದು ವರ್ಗೀಕರಿಸುವುದರ ಅರ್ಥವೇನು ? ಏನು ಕಾರಣ?

ಇದರ ಉತ್ತರ ಹೀಗೆ ಸಿಗಬಹುದು. "ಪುರಾಣಾದಿ ಗ್ರಂಥಗಳಾದರೆ ಮಾನವನ ತಿಳುವಳಿಕೆಗೆ ಎಟಕುವಂಥವು. ಆದರೆ ವೇದಾರ್ಥ ತಿಳಿಯದು. ವೇದಕ್ಕೆ ಅರ್ಥವನ್ನೇ ಮಾಡಲಾಗುವುದಿಲ್ಲ ಎನ್ನುವುದಷ್ಟೇ ಅಲ್ಲ. ವೇದಕ್ಕೆ ಅರ್ಥ ಮಾಡಲೇಕೂಡದು! ಅದೂ ಅಲ್ಲದೆ ವೇದಕ್ಕೆ ಅರ್ಥವೇ ಇಲ್ಲ!" ಹೀಗೆಲ್ಲಾ ಪ್ರಾಚೀನ ಮೀಮಾಂಸಕರು ಬಹಳಷ್ಟು ಆಗಿಹೋಗಿದ್ದಾರೆ! ಇದಕ್ಕೆ ಕಾರಣವೇನೆಂದರೆ ವೇದಾರ್ಥ ತಿಳುವಳಿಕೆಗೆ ಮೀರಿದ್ದು ಎಂಬ ವೇದಾರ್ಥದ ಅಜ್ಞೇಯತ್ವವೇ ವೇದ ಪ್ರಾಮಾಣ್ಯಕ್ಕೆ ಅಭೇದ್ಯ ಕವಚ!

ವೇದಗಳಿಗೆ ಪ್ರಮಾಣ? ಅದನ್ನು ಕೇಳಬೇಡಿ. ಅವು ಸ್ವತಃ ಪ್ರಮಾಣ! ಈ ತೆರದ ಸ್ವಯಂ ಪ್ರಾಮಾಣ್ಯವನ್ನು ಆರ್ಯಸಮಾಜ ಒಪ್ಪುವಂತೆ ಕಾಣುವುದಿಲ್ಲ. ವೇದಪ್ರಾಮಾಣ್ಯ ಒಪ್ಪುವ ಹಳೆಯ ಆಸ್ತಿಕ ದಾರ್ಶನಿಕರೂ ಸರ್ವಾತ್ಮನಾ 'ಸ್ವತಃ ಪ್ರಾಮಾಣ್ಯ' ವನ್ನು ವೇದಗಳಿಗೆ ಒಪ್ಪುವುದಿಲ್ಲ. ವೈಶೇಷಿಕ ಸೂತ್ರ ಒಂದು ಹೀಗಿದೆ; "ತದ್‌ವಚನಾತ್ ಆಮ್ನಾಯಸ್ಯ ಪ್ರಾಮಾಣ್ಯಮ್" ಅಂದರೆ "ಧರ್ಮವನ್ನು ಹೇಳುವುದರಿಂದ ವೇದ ಪ್ರಮಾಣ. ಪ್ರತ್ಯಕ್ಷ ಹಾಗೂ ಅನುಮಾನಗಳಿಂದಲೇ ಧರ್ಮವೆಂಬುದು ನಿಶ್ಚಿತವಾಗುತ್ತದೆ." ಆದುದರಿಂದ ನಿರಪೇಕ್ಷ ಸ್ವತಂತ್ರ ಪ್ರಮಾಣ ವೇದವೆಂದಾಗಲಿಲ್ಲ!

ದರ್ಶನಗಳಲ್ಲಿ ಆಸ್ತಿಕ–ನಾಸ್ತಿಕ ಭೇದಗಳೆಂಬ ವರ್ಗೀಕರಣಕ್ಕೆ ಕಾರಣ ಆತ್ಮದ ಅಸ್ತಿತ್ವ ಹಾಗೂ ಆತ್ಮದ ನಾಸ್ತಿತ್ವವನ್ನು ಅವಲಂಬಿಸಿದೆ. ಇಲ್ಲಿ ವೇದಪ್ರಾಮಾಣ್ಯದ ಮಾತೇ ಬಾರದು, ಅದೂ ಸ್ವತಂತ್ರವಾಗಿ. ದೇವರಿಗಿಂತ ವೇದ ಪ್ರಮಾಣವೆನ್ನುವುದಕ್ಕೆ ಎದುರಾಗಿ ವೇದಕ್ಕಿಂತ ಗುರುವೇ ಪ್ರಮಾಣ. ಗುರುವಿಗಿಂತ ನಾನೇ ಎಂದರೆ ಆತ್ಮಪ್ರಮಾಣ! ಹೀಗೂ ಹೇಳಲು ಬಂದೀತು. ಅಂತೂ ಹಿಂದೂತ್ವಕ್ಕೆ ವೇದಪ್ರಾಮಾಣ್ಯವನ್ನು ಲಕ್ಷಣವಾಗಿ ಗಂಟು ಹಾಕಿರುವ ಪಂಡಿತರ ವಿಚಾರವೂ ಅಷ್ಟೇನೂ ಆಳವಾದುದಲ್ಲ.

"ವೇದಕ್ಕೆ ಅರ್ಥವನ್ನೇ ಮಾಡಬೇಡಿ. ಆದರೆ ಪ್ರಾಮಾಣ್ಯ ಬುದ್ಧಿ ಮಾತ್ರ ಇರಲಿ." ಈ ಸಿದ್ಧಾಂತ ಸ್ವಲ್ಪ ಮಟ್ಟಿಗೆ ಸರಿಹೋಗುತ್ತದೆ. ಏಕೆಂದರೆ, ವೇದಕ್ಕೆ ಏನು ಅರ್ಥವೋ ಅದು ಬಲು ಪವಿತ್ರ ಹಾಗೂ ನಿಗೂಢ. ಇಂತಹ ಶ್ರದ್ಧೆಯಿಂದ ವೇದ ಪ್ರಾಮಾಣ್ಯಬುದ್ಧಿ ಇಟ್ಟುಕೊಂಡರೆ ಶಾಸ್ತ್ರ ದೃಷ್ಟಿಯಿಂದ ಸಂಭವನೀಯವೇ. ಯಾರಿಗೆ ಕೇವಲ ಸ್ವಸ್ತಿಕ ಆಕಾರದಲ್ಲೇ ಬ್ರಹ್ಮದರ್ಶನವಾಗಬಹುದೋ ಅಂತಹ ವೇದಶ್ರದ್ಧಾಳುಗಳಿಗೆ ವೇದದಲ್ಲೇ ಬ್ರಹ್ಮದರ್ಶನವಾಗಲು ಅಡ್ಡಿಯಿಲ್ಲ. ಅಂದರೆ, ಇದು ಮೂರ್ತಿಪೂಜೆಯಾಯಿತು. ಮೂರ್ತಿ ಕೇವಲ ಲೌಕಿಕ ದೃಷ್ಟಿಯಿಂದಲ್ಲ. ಸಾಲಿಗ್ರಾಮ ಗೋಳಾಕಾರದಲ್ಲಿದೆ ಎಂದರೆ ಆ ಬಗೆಯ ಮೂರ್ತಿಪೂಜೆ ವ್ಯರ್ಥ. ಸಾಲಿಗ್ರಾಮದ ಬಗೆಗೆ ಭೌತಿಕ ಜ್ಞಾನ ಬೇರೆ, ಮೂರ್ತಿಪೂಜೆ ಬೇರೆ. ನಿಜವಾದ ಪೂಜಕನಿಗೆ ಮೂರ್ತಿ ಅಲೌಕಿಕ.

ಈ ಸಿದ್ಧಾಂತದ ಪ್ರಕಾರ ವೇದಕ್ಕೆ ಅರ್ಥ ಮಾಡದಿದ್ದರೂ ಸರಿ ಹೋಗುತ್ತದೆ. ನಿಜವಾಗಿಯೂ ವೇದಕ್ಕೆ ಅರ್ಥ ಮಾಡಲೇ ಕೂಡದು.

"ಅಗ್ನಿಮ್ ಈಳೇ ಪುರೋಹಿತಂ" ಗೆ ಬದಲಾಗಿ "ವಹ್ನಿಂ ಈಳೇ ಪುರೋಹಿತಂ" ನಡೆಯದು! ಅನುವಾದವೂ ನಡೆಯದು! ವೇದದ ಬಗೆಗೆ ಪೂಜ್ಯ ಬುದ್ಧಿಯಷ್ಟೇ ಸರಿ. ಪುರೋಹಿತಂ – ನನ್ನ ಮುಂದಿರುವ, ಅಗ್ನಿಂ – ಬೆಂಕಿಯನ್ನು, ಈಳೇ – ನಾನು ಸ್ತುತಿಸು

ತ್ತೇನೆ. ಹೀಗೆ ಅರ್ಥೈಸುವುದೂ ಸರಿಯಲ್ಲ. ಒಂದೇ ಅಖಂಡ ಬ್ರಹ್ಮಧಾರೆಯಲ್ಲಿ ವೇದದ ಅಧ್ಯಯನ, ಪ್ರವಚನದಿಂದಲೇ ವೇದದ ಯಥಾರ್ಥವಾದ ಅರ್ಥ ತಿಳಿಯಬಹುದು. ಅಗ್ನಿಂ ಎಂದರೂ ಬ್ರಹ್ಮವೇ, ಈಳೇ ಎಂದರೂ ಬ್ರಹ್ಮವೇ, ಪುರೋಹಿತಂ ಎಂದರೂ ಬ್ರಹ್ಮವೇ. ಈ ವಿಚಾರ ಸರಣಿ ಬಲು ಕಡಿಮೆ ಜನರಿಗೆ ರುಚಿಸಿದರೂ ಸರಿಯೇ, ಈ ಪದ್ಧತಿಯಿಂದಲೇ ವೇದಾರ್ಥ ಯಥಾರ್ಥವಾಗಿ ತಿಳಿದೀತು.

ಉಪಾಸನೆಗೆ ಯಾವ ಮೂರ್ತಿಯಾದರೂ ಹಿಂದೂಧರ್ಮ ಒಪ್ಪುತ್ತದೆ. ಮೂರ್ತಿ ಬಂಧನ ಹಿಂದೂಧರ್ಮದ ಅಂಶವಲ್ಲ. ಅಂತೆಯೇ ಗ್ರಂಥ ಬಂಧನವೂ ಹಿಂದೂಧರ್ಮದ ಅಂಶವಲ್ಲ. ಉಪಾಸನೆಗೆ ಗೀತಾಮೂರ್ತಿಯಾಗಬಹುದು ಹಲವರಿಗೆ. ಸಂಸ್ಕೃತ ಬಾರದವನು ಗೀತಾ ಪುಸ್ತಕವನ್ನೇ ಪೂಜಿಸಬಹುದು. ಅದರಿಂದಲೇ ಆತನ ಭಾವಶುದ್ಧಿ ಏರ್ಪಡಬಹುದು. ಒಂದು ದಿನವೇನಾದರೂ ಭಗವದ್ಗೀತೆಯ ಮೇಲೆ ಸರಕಾರ ನಿಷೇಧ ತಂದರೂ ಪ್ರಾಣ ತೆತ್ತಾನು ಗೀತಾಭಕ್ತ. ಅದನ್ನು ಆತ ಲೆಕ್ಕಿಸುವುದಿಲ್ಲ. ಅಂಥವನನ್ನು ಗೀತೆಯಲ್ಲಿ ಏನಿದೆ ಎಂದು ಕೇಳಿ. ಉತ್ತರ ಏನು ಕೊಟ್ಟಾನು? "ಸತ್ಯ ಹೇಳು, ಪ್ರೇಮದಿಂದಿರು, ದೇವರನ್ನು ಮರೆಯಬೇಡ." ಅವನಿಗೇನೂ ವೇದಪ್ರಾಮಾಣ್ಯದ ಸೋಂಕೇ ಇಲ್ಲ. ಆದರವನು

ವೇದ ನಿಂದಕನಲ್ಲ. ಒಂದುವೇಳೆ ನಿಂದಿಸಿದರೂ ಗೀತಾಪ್ರೇಮದ ಉತ್ಕಟತೆಯಿಂದ ಹಾಗೆ ಹೇಳಬಹುದು. ಜ್ಞಾನೇಶ್ವರರು ವೇದ ವನ್ನು 'ಜಿಪ್ಪಣ' ಎನ್ನುತ್ತಾರೆ. ನಿಮಗೆ ವೇದ ದೇವರ ಉಸಿರಾದರೆ, ಗೀತೆಯೇ ಅವರಿಗೆ ಭಗವದ್ ವಾಣಿ.

ಈ ಎರಡೂ ತೆರದವರನ್ನು ಯಾರು ತಾನೇ ಹಿಂದೂ ಅಲ್ಲ ಎನ್ನಲಾದೀತು?

ಸರ್ವ ಸಾಹಿತ್ಯಗಳ ಆದಿಗ್ರಂಥವೆಂದರೆ ವೇದವೇ. ಪರಮ ಪಾವನರಾದ ಬ್ರಾಹ್ಮಣರು ತಮ್ಮ ಮಾಂಸ-ಮೂಳೆ ತೇಯ್ದು ತೇಯ್ದು ವೇದದ ರಕ್ಷಣೆ ಗೈದಿದ್ದಾರೆ, ವೇದಾರ್ಥ, ನಿಗೂಢ ಇತ್ಯಾದಿ ಕಾರಣಗಳಿಂದ ವೇದಪ್ರಾಮಾಣ್ಯ ಹೇಳಿದರೂ ಹೀಗೆ ಪೂಜ್ಯ ಭಾವನಾ ಮಾತ್ರದಿಂದ ವೇದಪ್ರಾಮಾಣ್ಯ ಇರಬಹುದಾದರೂ ಅದರ ಬಲಾತ್ಕಾರ ಯಾರ ಮೇಲೂ ಹಾಯದು. ವೇದಕ್ಕೆ ಬದಲು ಗೀತೆಯಷ್ಟೇ ಅಲ್ಲ, ಅರ್ಥನಿರಪೇಕ್ಷ ಪೂಜ್ಯ ಬುದ್ಧಿಯಿಂದ, ನಾನಾ ಮೂರ್ತಿ ಪೂಜೆಗಳಂತೆ ಈಶ್ವರನ ಒಂಭತ್ತನೆಯ ಅವತಾರವಾದ ಬುದ್ಧನನ್ನು ಪೂಜಿಸಿದರೆ ಹಿಂದೂಧರ್ಮಕ್ಕೆ ಆತನೇನೂ ಬಾಹ್ಯನಲ್ಲ. ಸ್ನಾನ, ಸಂಧ್ಯಾವಂದನೆ ಮಾಡಿ 'ಬೈಬಲ್' ಎಂದರೆ ಸಾಕ್ಷಾತ್ 'ಬ್ರಹ್ಮವೇ' ಎಂಬ ಶ್ರದ್ಧೆಯಿಂದ ಹಿಂದೂಧರ್ಮದ ಬಾಹ್ಯಾಚಾರ

ಮರೆತು ಓರ್ವ ಉಪಾಸನೆ ಮಾಡಿದರೂ ಅವನೇನೂ ಹಿಂದೂ ಧರ್ಮಕ್ಕೆ ಬಾಹ್ಯನಲ್ಲ.

ಇಲ್ಲೊಂದು ಪ್ರಶ್ನೆ ಕೇಳಬಹುದು: "ನೀವು ಹೇಳುವುದೆಲ್ಲಾ ಅಸಹಜ, ಅಸ್ವಾಭಾವಿಕ" ಎಂದು. ಆದರೆ ಅಸಂಭವವಲ್ಲವಷ್ಟೆ? ಜನ ಗುಲಾಮರಾಗಿ ವಿಷಸರಿಗಳ ಪ್ರಭಾವಜಾಲಕ್ಕೆ ಒಳಗಾಗುವರೆಂಬ ಮಾತಿರಬಹುದಾದರೂ ಓರ್ವ ಸತ್ಪುರುಷನ ಮುಖದಿಂದ ಕ್ರಿಸ್ತನ ಜೀವನ ಕೇಳಿ ಆ ಮಹಾನುಭಾವನ ಬಗೆಗೆ ಭಕ್ತಿ ಉಂಟಾಯಿತೆನ್ನಿ. ಆದರೆ ಮತಾಂತರ ಹೊಂದಲು ಇಚ್ಛಿಸನು. ಅಂಥವನು ಹಿಂದೂವಲ್ಲ ಎಂದು ಹೇಳಲು ಸಾಧ್ಯವಿಲ್ಲ. ಇದು ಸ್ಪಷ್ಟವಾದ ವಿಚಾರ. ಇಷ್ಟೆಲ್ಲಾ ಹೇಳಿದುದರ ತಾತ್ಪರ್ಯವೆಂದರೆ ಈಗ ಸಾಮಾನ್ಯ ಧಾರಣ ಇರುವಂತೆ, 'ವೇದಪ್ರಾಮಾಣ್ಯ'ದ ಆಗ್ರಹವನ್ನೇ ಇಟ್ಟುಕೊಂಡರೆ ಬರಬಹುದಾದ ಆಪತ್ತುಗಳನ್ನು ಚಿಂತಿಸಬೇಕೆಂಬುದೇ. ಆದುದರಿಂದ 'ವೇದ' ಎಂಬ ಮಹಾ ಶಬ್ದಕ್ಕೆ ವ್ಯಾಪಕವಾದ ಅರ್ಥ ಮಾಡುವುದೇ ಉಚಿತ. 'ವೇದ' ಎಂಬುದರಲ್ಲಿ ಸರ್ವಧರ್ಮಗಳ ಸಮಾವೇಶ ವುಂಟೆಂದರೆ ಚರ್ಚೆಗಳು ಕಡಿಮೆಯಾಗುವುವು. ಹಿಂದೂಧರ್ಮದಲ್ಲಿ ಮೂರ್ತಿ ಪೂಜೆಯಿರುವುದೂ ಇದರಿಂದ ಸಾಬೀತು ಆಗುತ್ತದೆ. ಇಂದಿನಂತೆ ಸಣ್ಣ ಅರ್ಥದಲ್ಲಿ ಗ್ರಂಥಪ್ರಾಮಾಣ್ಯ ಸಾಧಿತವಾಗದು. ★

# ಹಿಂದು ಶಬ್ದದ ನಿರುಕ್ತಿ

ಹಿಂಸಯಾ ದೂಯತೇ ಚಿತ್ತಂ
ಸ ವೈ ಹಿಂದುರಿತಿ ಸ್ಮೃತಃ

—ವಿನೋಬಾ

"ಹಿಂಸೆಯ ಹೆಸರು ಕೇಳಿದರೆ ಸಾಕು. ಯಾರ ಮನಸ್ಸು ದುಃಖ ಗೊಳ್ಳುವುದೋ, ಅಂತಹ ಪರಮ ಕರುಣಾಳುವೇ ಹಿಂದು."

೧. 'ಸತ್ಯ ಧರ್ಮಾಯ ದೃಷ್ಟಯೇ'
ಸತ್ಯ ಧರ್ಮವೇ ಹಿಂದೂಧರ್ಮ

—ಈಶಾವಾಸ್ಯೋಪನಿಷತ್

೨. "ಯಮೇವ ಏಷ ವೃಣುತೇ"
ಪ್ರೇಮ ಧರ್ಮವೇ ಹಿಂದೂ ಧರ್ಮ

—ಉಪನಿಷತ್

೩. ಭೂತದಯಾಂ ವಿಸ್ತಾರಯಂ
ಕರುಣೆಯೇ ಹಿಂದೂ ಧರ್ಮ

—ಶಂಕರಾಚಾರ್ಯ

## ಈ ಪುಸ್ತಕದ ಬೆಲೆ

೧ ಶ್ರದ್ಧಾಪೂರ್ವಕ ಇದರ ನಿತ್ಯಪಠನ

೨ ನಿತ್ಯ ಕಥನ

೩ ನಿತ್ಯ ಶ್ರವಣ

೪ ನಿತ್ಯ ಮನನ

೫ ನಿತ್ಯ ಜೀವನದಲ್ಲಿ ಆಚರಣೆ

೬ ನಿತ್ಯ ನಿಮ್ಮ ಖರ್ಚಿನಲ್ಲಿ ಒಂದಂಶ ಇಂತಹ ಸತ್‌ಸಾಹಿತ್ಯ ಪ್ರಕಾಶನಕ್ಕೆ ಸಂಪತ್ತಿದಾನ.

ಮುದ್ರಕರು

ಜನಪದ ಸೇವಾ ಟ್ರಸ್ಟ್ ಮುದ್ರಣಾಲಯ,

ಮೇಲುಕೋಟೆ.

ವಿನೋಬಾ ಶತಮಾನೋತ್ಸವದ (೧೯೯೫) ರ ಹೊತ್ತಿಗೆ
ಬೆಳಕು ಕಾಣಬೇಕಿರುವ

## ಅಯ್ಯೆಯರ್ ಕೃತಿಗಳು

(ವಿನೋಬಾ ಆದೇಶಾನುಸಾರ)

೧. ಯಜುರ್ವೇದಸಾರ
೨. ಆಳ್ವಾರ್ ಸಿರಿವಚನಸಾರ
೩. ರಾಮಾನುಜ ವಚನಸಾರ
೪. ಸಮನ್ವಯ ತ್ರಿವೇಣೀ
೫. ಯದುಶೈಲನಾಥ ಶತಕ ನಾಲ್ಕೂ
೬. ಪಂಚೋತ್ಸವ
(ಯಾತ್ರಾಸ್ಥಳಗಳ ಆದರ್ಶವೇ ಗ್ರಾಮದಾನ ರಹಸ್ಯ)